# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **781**
2. ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : **09.03.2021**
4. ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಎರಡು ವರ್ಷಗಳಲ್ಲಿ ಎಷ್ಟು ಸಕ್ಕರೆ ಕಾರ್ಖಾನೆಗಳು ರೈತರಿಗೆ ಕಬ್ಬಿನ ಬಾಕಿಯನ್ನು ಪಾವತಿ ಮಾಡಿರುವುದಿಲ್ಲ; ಸದರಿ ಸಕ್ಕರೆ ಕಾರ್ಖಾನೆಗಳ ಹೆಸರಿನೊಂದಿಗೆ ಕಾರ್ಖಾನೆಗಳು ರೈತರಿಗೆ ಕೊಡ ಬೇಕಾಗಿರುವ ಬಾಕಿ ಮೊತ್ತ ಎಷ್ಟು; (ಕಾರ್ಖಾನೆವಾರು ವಿವರ ನೀಡುವುದು) | 2018-19ನೇ ಸಾಲಿನಲ್ಲಿ 04 ಸಕ್ಕರೆ ಕಾರ್ಖಾನೆಗಳು ಹಾಗೂ 2019-20ನೇ ಸಾಲಿನಲ್ಲಿ 03 ಸಕ್ಕರೆ ಕಾರ್ಖಾನೆಗಳು ರೈತರಿಗೆ ಕಬ್ಬಿನ ಬಾಕಿಯನ್ನು ಪಾವತಿ ಮಾಡಿರುವುದಿಲ್ಲ.<br>ಸದರಿ ಸಕ್ಕರೆ ಕಾರ್ಖಾನೆಗಳು ರೈತರಿಗೆ ಕೊಡಬೇಕಾಗಿರುವ ಬಾಕಿ ಮೊತ್ತದ ಕಾರ್ಖಾನೆವಾರು ವಿವರಗಳನ್ನು **ಅನುಬಂಧ**-1ರಲ್ಲಿ ಒದಗಿಸಿದೆ. |
| (ಆ) | ಸಕ್ಕರೆ ಕಾರ್ಖಾನೆಗಳು ರೈತರಿಗೆ ಒಂದು ಟನ್ ಕಬ್ಬಿಗೆ ಎಷ್ಟು ಮೊತ್ತವನ್ನು ನೀಡುತ್ತವೆ; (ಕಾರ್ಖಾನೆಗಳ ವಿವರ ನೀಡುವುದು) | ಕೇಂದ್ರ ಸರ್ಕಾರವು ದಿನಾಂಕ: 26.08.2020 ರಂದು 2020-21ನೇ ಸಾಲಿನಲ್ಲಿ ಕಾರ್ಖಾನೆಗಳಿಗೆ ಸರಬರಾಜಾಗುವ ಕಬ್ಬಿಗೆ ಮೊದಲನೇ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು (ಎಫ್.ಆರ್.ಪಿ.) ಘೋಷಿಸಿರುತ್ತದೆ. ಆ ಪ್ರಕಾರವಾಗಿ ಶೇ. 9.5 ಮತ್ತು ಅದಕ್ಕಿಂತ ಕಡಿಮೆ ಇಳುವರಿ ಹೊಂದಿರುವ ಕಾರ್ಖಾನೆಗಳಿಗೆ ಪ್ರತಿ ಮೆ.ಟನ್ ಗೆ ರೂ.2708/- ಹಾಗೂ ಶೇ.10 ರಷ್ಟು ಸಕ್ಕರೆ ಇಳುವರಿಗೆ ಪ್ರತಿ ಮೆ.ಟನ್ ಒಂದಕ್ಕೆ ರೂ.2850/-ಗಳಷ್ಟು ನಿಗದಿಗೊಳಿಸಲಾಗಿದೆ. ಶೇ. 10ರ ನಂತರದ ಪ್ರತಿ ಶೇ.1ರಷ್ಟು ಇಳುವರಿಗೆ ಪ್ರತಿ ಮೆ.ಟನ್ ಒಂದಕ್ಕೆ ರೂ.285/- ರಂತೆ ಹೆಚ್ಚುವರಿ ಬೆಲೆ ನಿಗದಿಗೊಳಿಸಲಾಗಿದೆ.<br>ಈ ಆಧಾರದ ಮೇಲೆ ರಾಜ್ಯದ ಕಾರ್ಖಾನೆಗಳು ನುರಿಸುವ ಪ್ರತಿ ಮೆ.ಟನ್ ಕಬ್ಬಿಗೆ ರೈತರಿಗೆ ಪಾವತಿಸಬೇಕಾದ ಎಫ್.ಆರ್.ಪಿ ದರವನ್ನು 2020-21ನೇ ಹಂಗಾಮಿಗೆ ನಿಗದಿಗೊಳಿಸಿ ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯದಿಂದ ದಿನಾಂಕ: 02.11.2020 ರಂದು ಆದೇಶ ಹೊರಡಿಸಲಾಗಿದೆ<br>ಕಾರ್ಖಾನೆವಾರು ನಿಗದಿಪಡಿಸಿರುವ ನ್ಯಾಯ ಮತ್ತು ಲಾಭದಾಯಕ ಬೆಲೆಯ ವಿವರಗಳನ್ನು **ಅನುಬಂಧ-2** ರಲ್ಲಿ ಒದಗಿಸಿದೆ. |
| (ಇ) | ಸರ್ಕಾರವು ಒಂದು ಟನ್ ಕಬ್ಬಿಗೆ ನಿಗದಿಪಡಿಸಿದ ಕನಿಷ್ಠ ಬೆಂಬಲ ಬೆಲೆ ಎಷ್ಟು? | ಪ್ರಸ್ತುತ ಕಬ್ಬಿಗೆ ಕನಿಷ್ಠ ಬೆಂಬಲ ಬೆಲೆ ಘೋಷಿಸುವ ಪದ್ಧತಿ ಜಾರಿಯಲ್ಲಿರುವುದಿಲ್ಲ. ಆದರೆ, ಕೇಂದ್ರ ಸರ್ಕಾರವು ಪ್ರತಿ ಸಕ್ಕರೆ ಹಂಗಾಮಿಗೆ ಹಂಗಾಮು ಪ್ರಾರಂಭವಾಗುವ ಮೊದಲೇ ಕಬ್ಬಿಗೆ ಮೊದಲ ಕಂತಿನ ರೂಪದಲ್ಲಿ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು ಘೋಷಿಸುತ್ತದೆ. ಇದರ ಆಧಾರದ ಮೇಲೆ ಸಕ್ಕರೆ ಕಾರ್ಖಾನೆಗಳ ಹಿಂದಿನ ಹಂಗಾಮಿನ ಸಕ್ಕರೆ ಇಳುವರಿಯನ್ನು ಆಧರಿಸಿ ಪ್ರತಿ ಮೆ.ಟನ್ ಕಬ್ಬಿಗೆ ರೈತರಿಗೆ ಪಾವತಿಸಬೇಕಾದ ಎಫ್.ಆರ್.ಪಿ ದರವನ್ನು ನಿಗದಿಗೊಳಿಸಿ ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯದಿಂದ ಆದೇಶ ಹೊರಡಿಸಲಾಗುತ್ತದೆ. ಪ್ರಸ್ತುತ ಮೊದಲ ಕಂತಿನ ದರವನ್ನು ಪಾವತಿಸುವಂತೆ ಎಲ್ಲಾ ಸಕ್ಕರೆ ಕಾರ್ಖಾನೆಗಳಿಗೆ ಸೂಚಿಸಲಾಗುತ್ತದೆ. |

ಸಂಖ್ಯೆ: ಸಿಐ 16 ಎಸ್‌ಜಿಎಫ್ 2021

M. Nagaraju

(ಎನ್. ನಾಗರಾಜು.ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು.

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:781ಕ್ಕೆ ಅನುಬಂಧ-01

ರಾಜ್ಯದಲ್ಲಿ 2018-19 ಹಾಗೂ 2019-20ನೇ ಸಾಲುಗಳಲ್ಲಿ ಕಾರ್ಯನಿರ್ವಹಿಸಿರುವ ಸಕ್ಕರೆ ಕಾರ್ಖಾನೆಗಳು ರೈತರಿಗೆ ಕೊಡಬೇಕಾಗಿರುವ ಮೊತ್ತದ ಕಾರ್ಖಾನೆವಾರು ವಿವರಗಳು:

| ಕ್ರ. ಸಂ | ಹಂಗಾಮು | ಕಾರ್ಖಾನೆಯ ಹೆಸರು | ಕಬ್ಬು ಬಿಲ್ಲು ಬಾಕಿ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| 1 | 2018-19 | 1.ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ, ಹಳ್ಳಿಖೇಡ್, ಹುಮ್ನಾಬಾದ್ ತಾಲ್ಲೂಕು ಬೀದರ್ ಜಿಲ್ಲೆ | 89.00 |
| | | 2. ಭವಾನಿ ಶುಗರ್ಸ್ ಲಿ., ಬರೂರು, ಬೀದರ್ ತಾಲ್ಲೂಕು ಮತ್ತು ಜಿಲ್ಲೆ | 180.00 |
| | | 3.ಸಾವರೀನ್ ಇಂಡಸ್ಟ್ರೀಸ್ ಲಿ., ತೇರದಾಳ ಗ್ರಾಮ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 499.00 |
| | | 4 ಧ್ಯಾನಯೋಗಿ ಶ್ರೀ ಶಿವಕುಮಾರ ಸ್ವಾಮೀಜಿ ಶುಗರ್ಸ್ ಲಿ., ಹಿರೇಬೇವನೂರು, ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ. | 125.00 |
| ಒಟ್ಟು | | | 893.00 |
| 2 | 2019-2020 | 1. ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಸಿದ್ದಸಮುದ್ರ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ. | 580.00 |
| | | 2.ಚಾಮುಂಡೇಶ್ವರಿ ಶುಗರ್ಸ್ ಲಿ., ಭಾರತಿನಗರ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. | 4217.00 |
| | | 3.ಎನ್.ಎಸ್.ಎಲ್ ಶುಗರ್ಸ್ ಲಿ., ಕೊಪ್ಪ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ | 104.00 |
| ಒಟ್ಟು | | | 4901.00 |
| ನಿವ್ವಳ ಮೊತ್ತ | | | 5794.00 |

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ
ಸಕ್ಕರೆ ನಿರ್ದೇಶಕರು

ಆಯುಕ್ತರು
ಕಬ್ಬು ಅಭಿವೃದ್ಧಿ ಹಾಗೂ
ಸಕ್ಕರೆ ನಿರ್ದೇಶಕರು

ಕರ್ನಾಟಕ ಸರ್ಕಾರ

5ನೇ ಮಹಡಿ, ಎಫ್ ಬ್ಲಾಕ್, ಸಚಿವಾಲಯ ಸಂಕೀರ್ಣ, ಕೆ.ಜಿ. ರಸ್ತೆ,
[illegible] ಭವನ, [illegible]
ದೂರವಾಣಿ:080-22133390/22133393 ಫ್ಯಾಕ್ಸ್ : 080-2213[illegible]
ಇಮೇಲ್: canecommissioner@gmail.com
ವೆಬ್‌ಸೈಟ್: www.canecommissionarate.karnataka.gov.in

ವಿಷಯ:-2019-20ನೇ ಸಾಲಿನಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯ ಆಧಾರದ ಮೇಲೆ 2020-21ನೇ ಸಾಲಿಗೆ ಮೊದಲ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆ (Fair and Remunerative Price) ಪ್ರಕಟಣೆಯ ಕುರಿತು.

ಉಲ್ಲೇಖ:-1. ಗ್ರಾಹಕ ವ್ಯವಹಾರ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಕೃಷಿ ಭವನ, ನವದೆಹಲಿ ಇವರ ಪತ್ರ ಸಂ: 3(1)/2019-ಎಸ್‌ಪಿ I ದಿನಾಂಕ 26.08.2020

2. ದಿನಾಂಕ:15.10.2020 ರಂದು ನಡೆದ ಕಬ್ಬು ನಿಯಂತ್ರಣ ಮಂಡಳಿ ಸಭೆಯ ನಡವಳಿಗಳು

-*-

**ಪೀಠಿಕೆ:**

ಕೇಂದ್ರ ಸರ್ಕಾರವು ಉಲ್ಲೇಖ (1) ರಂತೆ 2020-21ನೇ ಸಕ್ಕರೆ ಹಂಗಾಮಿಗೆ ಈ ಕೆಳಗಿನಂತೆ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು (Fair and Remunerative Price) ನಿಗದಿಪಡಿಸಿದೆ.

1. ಶೇಕಡ 10.00 ರಷ್ಟು ಸಕ್ಕರೆ ಇಳುವರಿಗೆ ಪ್ರತಿ ಮೆಟ್ರಿಕ್ ಟನ್ ಕಬ್ಬಿಗೆ ರೂ.2850/-
2. ಶೇಕಡ 10.00 ಕ್ಕೆ ಮೇಲ್ಪಟ್ಟು ಇಳುವರಿಗೆ ನಂತರದ ಶೇಕಡ 1 ರಷ್ಟು ಇಳುವರಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ.285/- ರಂತೆ ಹೆಚ್ಚುವರಿ ಬೆಲೆ.
3. ಶೇಕಡ 10.00 ಕ್ಕಿಂತ ಕಡಿಮೆ ಹಾಗೂ ಶೇಕಡ 9.5ಕ್ಕೆ ಮೇಲ್ಪಟ್ಟ ಇಳುವರಿ ಹೊಂದಿರುವ ಸಕ್ಕರೆ ಕಾರ್ಖಾನೆಗಳಿಗೆ ಶೇಕಡ 1 ರಷ್ಟು ಇಳುವರಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ.285/-ರ ಸರಾಸರಿಯಂತೆ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು ಕಡಿಮೆ ಮಾಡುವುದು.
4. ಶೇಕಡ 9.5 ಕ್ಕಿಂತ ಕಡಿಮೆ ಇಳುವರಿ ಹೊಂದಿರುವ ಕಾರ್ಖಾನೆಗಳಿಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ.2708.00 ಗಳ ನ್ಯಾಯ ಮತ್ತು ಲಾಭದಾಯಕ ಬೆಲೆ.

2019-20ನೇ ಸಾಲಿನಲ್ಲಿ ರಾಜ್ಯದಲ್ಲಿ ಕಾರ್ಯನಿರ್ವಹಿಸಿರುವ 62 ಸಕ್ಕರೆ ಕಾರ್ಖಾನೆಗಳು ಸಲ್ಲಿಸಿದ ಆರ್.ಟಿ 8(ಸಿ) ವರದಿಗಳ ಪ್ರಕಾರ ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯಂತೆ ದಿನಾಂಕ:15.10.2020 ರಂದು ನಡೆದ ಕಬ್ಬು ನಿಯಂತ್ರಣ ಮಂಡಳಿ ಸಭೆಯಲ್ಲಿ 2020-21ನೇ ಕಬ್ಬು ನುರಿಸುವ ಹಂಗಾಮಿಗೆ ರಾಜ್ಯದ ಸಕ್ಕರೆ ಕಾರ್ಖಾನೆಗಳು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ-2014ರ ಕಲಂ 9(1) ರ ಪ್ರಕಾರ ಮೊದಲ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು (Fair and Remunerative Price) ಪ್ರಕಟಿಸಲು ನಿರ್ಣಯಿಸಿರುತ್ತದೆ. ಈ ಕಬ್ಬಿನ ದರವು ಎಫ್.ಆರ್.ಪಿ. ನಿಯಮದಂತೆ ಎಕ್ಸ್-ಗೇಟ್ ದರವಾಗಿರುತ್ತದೆ.

ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕಾರ್ಖಾನೆವಾರು ನ್ಯಾಯ ಮತ್ತು ಲಾಭದಾಯಕ ಬೆಲೆ (Fair and Remunerative Price) ನಿಗದಿಗೊಳಿಸುವ ಸಂಬಂಧ ಈ ಕೆಳಕಂಡ ಆದೇಶ ಹೊರಡಿಸಿದೆ.

## ಆದೇಶ

ಸಂಖ್ಯೆ: ಡಿಎಸ್‌ಕೆ/ಎಸ್‌ಕೆ/19/2020-21 (18)

ದಿನಾಂಕ: 02.11.2020

ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013 ಮತ್ತು ತಿದ್ದುಪಡಿ ಅಧಿನಿಯಮ 2014ರ ಕಲಂ 2(ii)(ಇಎ) ಮತ್ತು 9(1) ರನ್ವಯ ಉಲ್ಲೇಖ (1) ಮತ್ತು (2) ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಕ್ರಂ ಪಾಷಾ, ಭಾ.ಆ.ಸೇ., ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಆದ ನಾನು 2019-20ನೇ ಸಾಲಿನಲ್ಲಿ ರಾಜ್ಯದಲ್ಲಿ ಕಾರ್ಯ ನಿರ್ವಹಿಸಿರುವ 62 ಸಕ್ಕರೆ ಕಾರ್ಖಾನೆಗಳು ನುರಿಸಿದ ಕಬ್ಬಿನಿಂದ ಉತ್ಪಾದಿಸಲಾದ ಸಕ್ಕರೆ ಇಳುವರಿಯನ್ನು ಆಧಾರವಾಗಿಟ್ಟುಕೊಂಡು 2020-21ನೇ ಸಾಲಿಗೆ ರಾಜ್ಯದ ಸಕ್ಕರೆ ಕಾರ್ಖಾನೆಗಳು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರ ಕಲಂ 9(1)ರ ಪ್ರಕಾರ ಮೊದಲ ಕಂತಿನ ರೂಪದಲ್ಲಿ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು (Fair and Remunerative Price)ಈ ಕೆಳಕಂಡಂತೆ ಅಧಿಕೃತವಾಗಿ ಪ್ರಕಟಿಸಿರುತ್ತೇನೆ. ಈ ಕಬ್ಬಿನ ದರವು ಎಫ್.ಆರ್.ಪಿ. ನಿಯಮದಂತೆ ಎಕ್ಸ್-ಗೇಟ್ ದರವಾಗಿರುತ್ತದೆ. ಈ ಪ್ರಕಟಣೆಯಲ್ಲಿನ ಅಂಕಿ ಅಂಶಗಳು ಕೇಂದ್ರ ಸರ್ಕಾರವು ಕಾರ್ಖಾನೆವಾರು ಹೊರಡಿಸಿರುವ ನ್ಯಾಯ ಮತ್ತು ಲಾಭದಾಯಕ ಬೆಲೆಯ (Fair and Remunerative Price) ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

| ಕ್ರ. ಸಂ. | ಸಕ್ಕರೆ ಕಾರ್ಖಾನೆಗಳ ಹೆಸರು | 2019-20ನೇ ಸಾಲಿನಲ್ಲಿ (01.07.2019 ರಿಂದ 30.06.2020 ರವರೆಗೆ) | | | 2020-21ನೇ ಸಾಲಿಗೆ ಪ್ರತಿ ಮೆ.ಟನ್ ಕಬ್ಬಿಗೆ ಪಾವತಿಸಬೇಕಾದ ನ್ಯಾಯ ಮತ್ತು ಲಾಭದಾಯಕ ಬೆಲೆ (ಎಫ್‌ಆರ್‌ಪಿ) (ರೂ.ಗಳಲ್ಲಿ) |
|---|---|---|---|---|---|
| | | ನುರಿಸಿದ ಕಬ್ಬಿನ ಪ್ರಮಾಣ (ಮೆ. ಟನ್ ಗಳಲ್ಲಿ) | ಉತ್ಪಾದಿಸಿದ ಸಕ್ಕರೆ ಪ್ರಮಾಣ (ಮೆ. ಟನ್ ಗಳಲ್ಲಿ) | ಶೇಕಡ ಇಳುವರಿ (%) | |
| 1 | 2 | 3 | 4 | 5 | 6 |
| | ಬೆಳಗಾವಿ ಜಿಲ್ಲೆ | | | | |
| 1 | ಅಥಣಿ ಶುಗರ್ಸ್ ಲಿ., ವಿಷ್ಣು ಅಣ್ಣಾನಗರ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ. | 636352 | 67766 | 10.65 | 3035 |
| 2 | ಲೈಲಾ ಶುಗರ್ಸ್ ಲಿ., (ಗುತ್ತಿಗೆದಾರರು-ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಕುಪ್ಪಟಗಿರಿ, ಖಾನಾಪುರ ತಾಲ್ಲೂಕು, ಬೆಳಗಾವಿ ಜಿಲ್ಲೆ. | 209620 | 24422 | 11.65 | 3320 |

BANGALORE

| 1 | 2 | 3 | 4 | 5 | 6 |
|---|---|---|---|---|---|
| 3 | ಧೂದ್‌ಗಂಗಾ ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚಿಕ್ಕೋಡಿ, ಬೆಳಗಾವಿ ಜಿಲ್ಲೆ | 658903 | 70005 | 11.76 | 3353 |
| 4 | ಇ.ಐ.ಡಿ ಪ್ಯಾರಿ (ಇಂಡಿಯಾ) ಲಿ., (ಗುತ್ತಿಗೆದಾರರು ಧನಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಖಾನ್‌ಪೇಟೆ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ. | 490494 | 57877 | 11.80 | 3363 |
| 5 | ಘಟಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಂಗನಕೇರಿ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ | 237585 | 23867 | 10:05 | 2864 |
| 6 | ಗೋಕಾಕ್ ಶುಗರ್ಸ್, ಕೊಳವಿ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ | 396481 | 44497 | 11.22 | 3198 |
| 7 | ಹಾಲಸಿದ್ದನಾಥ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 307291 | 36094 | 11.75 | 3349 |
| 8 | ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಂಕೇಶ್ವರ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 489869 | 52510 | 10.72 | 3055 |
| 9 | ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಳಿಯಾಳ, ಅಥಣಿ ತಾಲ್ಲೂಕು, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 322637 | 33884 | 10.50 | 2993 |
| 10 | ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಎಂ.ಕೆ. ಹುಬ್ಬಳ್ಳಿ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ | 171933 | 16771 | 9.75 | 2779 |
| 11 | ರೇಣುಕಾ ಶುಗರ್ಸ್ ಲಿ., (ಗುತ್ತಿಗೆದಾರರು- ರಾಯಬಾಗ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಮೇಕಳಿ, ರಾಯಬಾಗ್ ತಾಲ್ಲೂಕು, ಬೆಳಗಾವಿ ಜಿಲ್ಲೆ. | 233200 | 25000 | 10.72 | 3055 |
| 12 | ರೇಣುಕಾ ಶುಗರ್ಸ್, ಬುರ್ಲಟ್ಟಿ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 821651 | 46277 | 10.50 | 2993 |
| 13 | ರೇಣುಕಾ ಶುಗರ್ಸ್, ಮುನವಳ್ಳಿ ಸವದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 988612 | 98555 | 11.90 | 3391 |
| 14 | ಸತೀಶ್ ಶುಗರ್ಸ್ ಲಿ., ಹುಣಶ್ಯಾಳ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ. | 1051280 | 113730 | 11.33 | 3229 |
| 15 | ಶಿರಗುಪ್ಪಿ ಶುಗರ್ ವರ್ಕ್ಸ್ ಲಿ.,ಕಾಗವಾಡ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 313531 | 37674 | 12.02 | 3425 |
| 16 | ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಿದ್ಧಸಮುದ್ರ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ | 196049 | 22082 | 11.26 | 3209 |
| 17 | ಶಿವಶಕ್ತಿ ಶುಗರ್ಸ್ ಲಿ., ಸೌದತ್ತಿ, ರಾಯಬಾಗ್ ತಾಲ್ಲೂಕು, ಬೆಳಗಾವಿ ಜಿಲ್ಲೆ | 880255 | 86516 | 11.08 | 3157 |

| 1 | 2 | 3 | 4 | 5 | 6 |
|---|---|---|---|---|---|
| 18 | ಉಗಾರ್ ಶುಗರ್ಸ್ ವರ್ಕ್ಸ್ ಲಿ., ಉಗಾರ್‌ಖುರ್ದ್, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 1402599 | 155734 | 10.76 | 3061 |
| 19 | ವೆಂಕಟೇಶ್ವರ ಪವರ್ ಪ್ರಾಜೆಕ್ಟ್ ಲಿ., ಬೇಡ್ಕಿಹಾಳ್, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ. | 835277 | 101916 | 12.20 | 3477 |
| 20 | ಸೌಭಾಗ್ಯಲಕ್ಷ್ಮಿ ಶುಗರ್ಸ್, ಹಿರೇನಂದಿ, ಗೋಕಾಕ್ ತಾಲ್ಲೂಕು, ಬೆಳಗಾವಿ ಜಿಲ್ಲೆ | 171189 | 18154 | 10.60 | 3021 |
| 21 | ವಿಶ್ವರಾಜ್ ಶುಗರ್ ಇಂಡಸ್ಟ್ರೀಸ್ ಲಿ., ಬೆಲ್ಲದ ಬಾಗೇವಾಡಿ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 702776 | 77150 | 10.98 | 3129 |
| 22 | ಓಂ ಶುಗರ್ಸ್ ಲಿ., ಜೈನಾಪುರ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 213989 | 24815 | 11.60 | 3306 |
| 23 | ಬೆಳಗಾಂ ಶುಗರ್ಸ್ ಪ್ರೈ ಲಿ., ಹುದಲಿ, ಬೆಳಗಾವಿ ತಾಲ್ಲೂಕು & ಜಿಲ್ಲೆ | 455006 | 51774 | 11.38 | 3243 |
| 24 | ಹರ್ಷ ಶುಗರ್ಸ್ ಲಿ., ಸೌದತ್ತಿ, ಸೌದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 468736 | 51473 | 10.98 | 3129 |
| | **ಬಾಗಲಕೋಟೆ ಜಿಲ್ಲೆ** | | | | |
| 25 | ಬೀಳಗಿ ಶುಗರ್ಸ್ ಲಿ., ಬಡಗಂಡಿ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 884557 | 92915 | 10.50 | 2993 |
| 26 | ಜೆಮ್ ಶುಗರ್ಸ್ ಲಿ., ಕುಂದರಗಿ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 523051 | 51321 | 10.86 | 3096 |
| 27 | ಗೋದಾವರಿ ಶುಗರ್ಸ್ ಲಿ., ಸಮೀರವಾಡಿ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 1526610 | 125010 | 11.10 | 3163 |
| 28 | ಇಂಡಿಯನ್ ಕೇನ್ ಪವರ್ ಲಿ., ಉತ್ತೂರ್, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 1070078 | 114244 | 10.68 | 3044 |
| 29 | ಜಮಖಂಡಿ ಶುಗರ್ಸ್ ಲಿ., ಹಿರೇಪಡಸಲಗಿ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 509083 | 42640 | 10.93 | 3114 |
| 30 | ಎಂಆರ್‌ಎನ್ ಕೇನ್ ಪವರ್ ಲಿ., ಕಲ್ಲಾಪುರ, ಬಾಗಲಕೋಟೆ ಜಿಲ್ಲೆ | 448334 | 46140 | 10.29 | 2933 |
| 31 | ನಿರಾಣಿ ಶುಗರ್ಸ್ ಲಿ, ಮುಧೋಳ್, ಬಾಗಲಕೋಟೆ ಜಿಲ್ಲೆ. | 1322054 | 125855 | 9.52 | 2713 |
| 32 | ಪ್ರಭುಲಿಂಗೇಶ್ವರ ಶುಗರ್ಸ್ ಲಿ., ಸಿದ್ದಾಪುರ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 905031 | 87342 | 9.65 | 2750 |
| 33 | ರೈತರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರನ್ನಾನಗರ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | 266335 | 28350 | 10.64 | 3032 |
| 34 | ಇ.ಐ.ಡಿ ಪ್ಯಾರಿ (ಇಂಡಿಯಾ) ಲಿ., ನಾಯಿನೇಗಿಲಿ, ಬಾಗಲಕೋಟೆ ತಾಲ್ಲೂಕು ಮತ್ತು ಜಿಲ್ಲೆ | 497405 | 54695 | 11.00 | 3135 |

| 1 | 2 | 3 | 4 | 5 | 6 |
|---|---|---|---|---|---|
| 35 | ಶ್ರೀ ಸಾಯಿ ಪ್ರಿಯಾ ಶುಗರ್ಸ್ ಲಿ., ಹಿಪ್ಪರಗಿ/ ಮೈಗೂರು, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, | 1005627 | 76464 | 10.30 | 2937 |
| | ಬೀದರ್ ಜಿಲ್ಲೆ | | | | |
| 36 | ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಿಚಿಕ್‌ಮತ್, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ | 330228 | 26420 | 8.00 | 2708 |
| 37 | ನಾರಂಜಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಇಮಾಂಪುರ, ಬೀದರ್ ತಾಲ್ಲೂಕು ಮತ್ತು ಜಿಲ್ಲೆ | 222057 | 18646 | 8.40 | 2708 |
| 38 | ಭಾಲ್ಕೇಶ್ವರ ಶುಗರ್ಸ್ ಲಿ., ಬಾಜೋಳಗಾ, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ | 322047 | 29920 | 9.29 | 2708 |
| 39 | ಬೀದರ್ ಕಿಸಾನ್ ಸಕ್ಕರ್ ಕಾರ್ಖಾನಾ ಲಿ., ಮೊಗದಾಳ್, ಬೀದರ್ ತಾಲ್ಲೂಕು ಮತ್ತು ಜಿಲ್ಲೆ. | 322158 | 30597 | 9.50 | 2708 |
| | ಬಳ್ಳಾರಿ ಜಿಲ್ಲೆ | | | | |
| 40 | ಮೈಲಾರ ಶುಗರ್ಸ್ ಲಿ., ಬಿರಬ್ಬಿ, ಹೂವಿ ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ | 468382 | 44671 | 9.54 | 2718 |
| | ಚಾಮರಾಜನಗರ ಜಿಲ್ಲೆ | | | | |
| 41 | ಬನ್ನಾರಿ ಅಮ್ಮನ್ ಶುಗರ್ಸ್ ಲಿ, ಕುಂತೂರು, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ | 884039 | 90385 | 10.22 | 2913 |
| | ದಾವಣಗೆರೆ ಜಿಲ್ಲೆ | | | | |
| 42 | ದಾವಣಗೆರೆ ಶುಗರ್ಸ್ ಲಿ., ಕುಕ್ಕವಾಡ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ | 326210 | 29364 | 9.00 | 2708 |
| 43 | ಶ್ಯಾಮನೂರು ಶುಗರ್ಸ್ ಲಿ., ದುಗ್ಗಾವತಿ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ | 292527 | 13565 | 9.01 | 2708 |
| | ಗದಗ್ ಜಿಲ್ಲೆ | | | | |
| 44 | ವಿಜಯನಗರ ಶುಗರ್ಸ್ ಲಿ., (ಗುತ್ತಿಗೆದಾರರು- ಮೃಡಗಿರಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಗಂಗಾಪುರ, ಮುಂಡರಗಿ, ತಾಲ್ಲೂಕು, ಗದಗ್ ಜಿಲ್ಲೆ | 613107 | 55300 | 9.53 | 2716 |
| | ಹಾವೇರಿ ಜಿಲ್ಲೆ | | | | |
| 45 | ಜಿಎಂ ಶುಗರ್ಸ್ ಲಿ., (ಗುತ್ತಿಗೆದಾರರು-ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿ.,)ಸಂಗೂರ್, ಹಾವೇರಿ ತಾಲ್ಲೂಕು ಮತ್ತು ಹಾವೇರಿ ಜಿಲ್ಲೆ. | 429013 | 41411 | 9.65 | 2750 |
| | ಕಲಬುರಗಿ ಜಿಲ್ಲೆ | | | | |
| 46 | ಎನ್‌ಎಸ್‌ಎಲ್ ಶುಗರ್ಸ್ ಲಿ., (ಗುತ್ತಿಗೆದಾರರು-ಸಹಕಾರಿ ಸಕ್ಕರೆ ಕಾರ್ಖಾನೆ ನಿ.,) ಭೂಸನೂರು, ಆಳಂದ ತಾಲ್ಲೂಕು, ಕಲಬುರಗಿ ಜಿಲ್ಲೆ. | 238850 | 23101 | 9.67 | 2756 |

| 1 | 2 | 3 | 4 | 5 | 6 |
|---|---|---|---|---|---|
| 47 | ರೇಣುಕಾ ಶುಗರ್ಸ್, ಹವಳಗ, ಅಫ್ಜಲ್‌ಪುರ ತಾಲ್ಲೂಕು, ಕಲಬುರಗಿ ಜಿಲ್ಲೆ. | 349341 | 10896 | 10.01 | [illegible] |
| 48 | ಉಗಾರ್ ಶುಗರ್ಸ್ ವರ್ಕ್ಸ್ ಲಿ., ನಾಗರಹಳ್ಳಿ, ಜೇವರ್ಗಿ ತಾಲ್ಲೂಕು, ಕಲಬುರಗಿ ಜಿಲ್ಲೆ | 238358 | 23359 | 9.80 | 2793 |
| | ಮಂಡ್ಯ ಜಿಲ್ಲೆ | | | | |
| 49 | ಚಾಮುಂಡೇಶ್ವರಿ ಶುಗರ್ಸ್ ಲಿ, ಭಾರತಿ ನಗರ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. | 966159 | 90639 | 9.38 | 2708 |
| 50 | ಕೋರಮಂಡಲ್ ಶುಗರ್ಸ್ ಲಿ., ಮಾಕವಳ್ಳಿ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ. | 342527 | 78987 | 9.38 | 2708 |
| 51 | ಎಸ್‌ಎಸ್‌ಎಲ್ ಶುಗರ್ಸ್, ಕೊಪ್ಪ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. | 698647 | 68209 | 9.76 | 2782 |
| | **ಮೈಸೂರು ಜಿಲ್ಲೆ** | | | | |
| 52 | ಬನ್ನಾರಿ ಅಮ್ಮನ್ ಶುಗರ್ಸ್ ಲಿ, ಅಲಗಂಚಿ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ | 1443460 | 140973 | 9.77 | 2784 |
| | **ಉತ್ತರ ಕನ್ನಡ ಜಿಲ್ಲೆ** | | | | |
| 53 | ಇ.ಐ.ಡಿ. ಪ್ಯಾರಿ (ಇಂಡಿಯಾ) ಲಿ., ಹುಲ್ಲಟ್ಟಿ, ಹಳಿಯಾಳತಾಲ್ಲೂಕು, ಉತ್ತರಕನ್ನಡಜಿಲ್ಲೆ | 774066 | 87468 | 11.30 | 3221 |
| | **ವಿಜಯಪುರ ಜಿಲ್ಲೆ** | | | | |
| 54 | ಇಂಡಿಯನ್ ಶುಗರ್ ಮ್ಯಾನುಫ್ಯಾಕ್ಚರಿಂಗ್ ಕಂಪನಿ ಲಿ., ಹಾವಿನಾಳ, ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ | 182241 | 18030 | 9.89 | 2819 |
| 55 | ನಂದಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕೃಷ್ಣಾನಗರ, ವಿಜಯಪುರ ತಾಲ್ಲೂಕು ಮತ್ತು ಜಿಲ್ಲೆ | 705983 | 83314 | 11.80 | 3363 |
| 56 | ಜಮಖಂಡಿ ಶುಗರ್ಸ್ ಲಿ., (ಘಟಕ-2) ನಾದ್ ಕೆ.ಡಿ. ಇಂಡಿ ತಾಲ್ಲೂಕು ವಿಜಯಪುರ ಜಿಲ್ಲೆ | 293402 | 30043 | 10.24 | 2918 |
| 57 | ಕೆ.ಪಿ.ಆರ್. ಶುಗರ್ ಮಿಲ್ಸ್, ಅಲಮೇಲು ಗ್ರಾಮ, ಸಿಂಧಗಿತಾಲ್ಲೂಕು,ವಿಜಯಪುರ ಜಿಲ್ಲೆ. | 705430 | 65390 | 10.16 | 2895 |
| 58 | ಮನಾಲಿ ಶುಗರ್ಸ್ ಲಿ., ಮಲಘಾಣ್, ಸಿಂಧಗಿ ತಾಲ್ಲೂಕು, ವಿಜಯಪುರ ಜಿಲ್ಲೆ | 136702 | 10603 | 7.76 | 2708 |
| 59 | ಶ್ರೀ ಬಸವೇಶ್ವರ ಶುಗರ್ಸ್ ಲಿ., ಕಾರಜೋಳ್, ಬಸವನಬಾಗೇವಾಡಿ ತಾಲ್ಲೂಕು, ವಿಜಯಪುರ ಜಿಲ್ಲೆ | 498172 | 52994 | 10.64 | 3032 |
| 60 | ಶ್ರೀ ಬಾಲಾಜಿ ಶುಗರ್ಸ್ & ಕೆಮಿಕಲ್ಸ್ ಪ್ರೈ ಲಿ., ಯರಗಲ್, ಮುದ್ದೇಬಿಹಾಳ್ ತಾಲ್ಲೂಕು, ವಿಜಯಪುರ ಜಿಲ್ಲೆ | 610492 | 66541 | 10.90 | 3107 |
| 61 | ಶ್ರೀ ಭೀಮಾಶಂಕರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಮರಗೂರು, ಇಂಡಿ ತಾಲ್ಲೂಕು, ವಿಜಯಪುರ ಜಿಲ್ಲೆ | 282462 | 28770 | 10.19 | 2904 |



| 1 | 2 | 3 | 4 | 5 | 6 |
|---|---|---|---|---|---|
| | ಯಾದಗಿರಿ ಜಿಲ್ಲೆ | | | | |
| 62 | ಕೋರ್ ಗ್ರೀನ್ ಶುಗರ್ಸ್ ಲಿ., ತುಮಕೂರು, ಶಹಾಪುರ ತಾಲ್ಲೂಕು, ಯಾದಗಿರಿ ಜಿಲ್ಲೆ | 236333 | 17640 | 9.59 | 2754 |

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ 02.11.2020 ರಂದು ಹೊರಡಿಸಿರುತ್ತೇನೆ.




2/11/20

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ
ಸಕ್ಕರೆ ನಿರ್ದೇಶಕರು

ಇವರಿಗೆ:
ರಾಜ್ಯದ ಎಲ್ಲಾ ಸಕ್ಕರೆ ಕಾರ್ಖಾನೆಗಳ
ವ್ಯವಸ್ಥಾಪಕ ನಿರ್ದೇಶಕರು/
ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು.

ಪ್ರತಿಯನ್ನು:
1) ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ. ಮಾಹಿತಿಗಾಗಿ ಸಲ್ಲಿಸಿದೆ.
2) ಜಿಲ್ಲಾಧಿಕಾರಿಗಳು, ಬೆಳಗಾವಿ/ ಬಾಗಲಕೋಟೆ/ ವಿಜಯಪುರ/ ಉತ್ತರ ಕನ್ನಡ/ ಗದಗ/ ಹಾವೇರಿ/ ಬೀದರ್/ ಕಲಬುರಗಿ/ ಯಾದಗಿರಿ/ ದಾವಣಗೆರೆ/ ಬಳ್ಳಾರಿ/ ಮಂಡ್ಯ/ ಮೈಸೂರು/ ಚಾಮರಾಜನಗರ ಇವರುಗಳಿಗೆ ಮಾಹಿತಿ ಹಾಗೂ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

02/11/20